# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಡಿಸೆಂಬರ್ ೨೭, ೨೦೧೨ (ಪುಷ್ಯ ೬, ಶಕ ವರ್ಷ ೧೯೩೪) | ಸಂಚಿಕೆ ೫೧ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ, ಸಂಸ್ಕೃತಿ, ಹಾಗೂ ವಾರ್ತಾ ಸಚಿವಾಲಯ

**ವಿಷಯ:** ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವಶದಲ್ಲಿರುವ ಗುಪ್ತ ನಿಧಿಯ ಭದ್ರತಾ ಕೊಠಡಿಯನ್ನು ತೆರೆದು ತಪಶೀಲು ಪಟ್ಟಿ ತಯಾರಿಸಲು ಅಧಿಕಾರಿಗಳ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಸಂವಪ್ರ 127 ಕೆಎಂಯು 2006, ದಿನಾಂಕ: 23–2–2008.

2. ದಿನಾಂಕ 02–1–2012 ರಂದು ಕೊನೆಗೊಂಡ ಪತ್ರ ಸಂಖ್ಯೆ: ಡಿಎಎಂ/ಸ.ನಿ. ಟಿ.ಅರ್.ಟಿ/2011–12.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಸಮಕ್ಷಮದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಶದಲ್ಲಿರುವ ಗುಪ್ತನಿಧಿಯ ಭದ್ರತಾ ಕೊಠಡಿಯನ್ನು ತೆರೆದು ಪರಿಶೀಲನೆ ಕೈಗೊಳ್ಳಲು ಗುಪ್ತನಿಧಿಗಳ ಗಣಕೀಕರಣ ಶ್ರೀ ವಿ.ಎ. ಮಾಚಕನೂರ, ಕೆ.ಎ.ಎಸ್. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳ ಮತ್ತು ಪರಂಪರೆ ಇಲಾಖೆ ಇವರ ಅಧ್ಯಕ್ಷತೆಯನ್ನೊಳಗೊಂಡಂತೆ ಸಮಿತಿಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಚಿಸಲಾಗಿತ್ತು.

ಈಗಾಗಲೇ ರಚಿತವಾಗಿರುವ ಸಮಿತಿಯಲ್ಲಿನ ಅಧಿಕಾರಿಗಳ ಹೆಸರುಗಳನ್ನು ಬಿಟ್ಟು ಶ್ರೀ ಸೂರ್ಯನಾರಾಯಣ, ನಿವೃತ್ತ ಅಧಿಕಾರಿಯನ್ನು ಸದಸ್ಯರನ್ನಾಗಿ ನೇಮಕ ಮಾಡಿರುವುದಕ್ಕೆ ಬದಲಾಗಿ ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಬೆಂಗಳೂರು ಇವರನ್ನು ಸದಸ್ಯರನ್ನಾಗಿ ನೇಮಕ ಮಾಡುವಂತೆ ಹಾಗೂ ಗುಪ್ತ ನಿಧಿಗಳನ್ನು ತಪಶೀಲು ಪಟ್ಟಿ ಮಾಡುವ ಸಮಯಲ್ಲಿ ವಹಿಸಬೇಕಾದ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುವುದಕ್ಕೆ ಸಂಬಂಧಿಸಿದಂತೆ ಮಾರ್ಗಸೂಚಿಯನ್ನು ಹೊರಡಿಸುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 102 ಕೆಎಂಯು 2009, ಬೆಂಗಳೂರು, ದಿನಾಂಕ 28–07–2012.**

ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಅವರ ಸಮಕ್ಷಮದಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವಶದಲ್ಲಿರುವ ಗುಪ್ತನಿಧಿ ಭದ್ರತಾ ಕೊಠಡಿಯನ್ನು ತೆರೆದು ಭೌತಿಕ ತಪಾಸಣೆ ಮತ್ತು ಗಣಕೀಕರಣವನ್ನು ಮಾಡಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1 | ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳ ಮತ್ತು ಪರಂಪರೆ ಇಲಾಖೆ, ಮೈಸೂರು | ಅಧ್ಯಕ್ಷರು |
| 2 | ನಿರ್ದೇಶಕರು, (ಪ್ರಾಚ್ಯ ವಸ್ತು) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು | ಸದಸ್ಯರು |
| 3 | ನಿರ್ದೇಶಕರು, (ವಸ್ತು ಸಂಗ್ರಹಾಲಯಗಳು) ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು | ಸದಸ್ಯರು |
| 4 | ಆರಕ್ಷಕ ಅಧೀಕ್ಷರು, (ಆರ್ಥಿಕ ಇಲಾಖೆಯ ಸಲಹೆ ಮೇರೆಗೆ ತೀರ್ಮಾನಿಸಿದಂತೆ)ಮೈಸೂರು ಜಿಲ್ಲೆ, ಮೈಸೂರು. | ಸದಸ್ಯರು |

| | | |
|---|---|---|
| 5 | ಉಪನಿರ್ದೇಶಕರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು | ಸದಸ್ಯರು |
| 6 | ಮುಜರಾಯಿ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು | ಸದಸ್ಯರು |
| 7 | ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು | ಸದಸ್ಯರು |
| 8 | ಸಹಾಯಕ ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು | ಸದಸ್ಯ ಕಾರ್ಯದರ್ಶಿ |

ಜಿಲ್ಲಾಧಿಕಾರಿಗಳು, ಮೈಸೂರು ಅವರ ಸಮಕ್ಷಮದಲ್ಲಿ ಗುಪ್ತನಿಧಿ ಭದ್ರತಾ ಕೊಠಡಿಯನ್ನು ತೆರೆದು ಪರಿಶೀಲನೆ ಮತ್ತು ಗಣಕೀಕರಣ ಮಾಡಲು ಈ ಅದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿನ ಮಾರ್ಗಸೂಚಿಗಳನ್ವಯ ಕ್ರಮ ಕೈಗೊಳ್ಳಬೇಕೆಂದು ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆ, (ಆಡಳಿತ ಶಾಖೆ)

**ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 102 ಕೆಎಂಯು 2009 ದಿನಾಂಕ: 28.07.2012ಕ್ಕೆ ಅನುಬಂಧ**

**ಭದ್ರತಾ ಕೊಠಡಿಯಲ್ಲಿನ ಗುಪ್ತ ನಿಧಿಯ ಇನ್‌ವೆಂಟರಿಯನ್ನು ಕೈಗೊಳ್ಳಲು ಮಾರ್ಗಸೂಚಿಗಳು**

1. ಸರ್ಕಾರವು ರಚಿಸಿರುವ ಅಧಿಕಾರಿ ಸಮಿತಿಯು ಸಭೆಯನ್ನು ಕಾಲಕಾಲಕ್ಕೆ ಏರ್ಪಡಿಸಿ ಅದರಿಂದ ಸೂಕ್ತ ಮಾರ್ಗದರ್ಶನವನ್ನು ಪಡೆಯಬೇಕು.
2. ಗುಪ್ತ ನಿಧಿಯಿರುವ ಭದ್ರತಾ ಕೊಠಡಿಯನ್ನು ತೆರೆಯುವಾಗ ಹಾಗೂ ಮುಚ್ಚುವಾಗ ಇಲಾಖಾ ಅಧಿಕಾರಿಯಿಂದ (ಗ್ರೂಪ್–ಎ) ಪಂಚನಾಮೆ ಮಾಡಬೇಕು.
3. ಭದ್ರತಾ ಕೊಠಡಿಗೆ Double Locking system ಅಳವಡಿಸಿ ಒಂದು ಬೀಗದ ಕೀಯನ್ನು ಸಮಿತಿಯ ಅಧ್ಯಕ್ಷರ ಬಳಿಯು ಮತ್ತೊಂದು ಬೀಗದ ಕೀಯನ್ನು ಸಮಿತಿಯ ಇತರೆ ಯಾವುದಾದರೂ ಸದಸ್ಯರ ಬಳಿ ಇರುವಂತೆ ನೋಡಿಕೊಳ್ಳತಕ್ಕದ್ದು.
4. ಭದ್ರತಾ ಕೊಠಡಿಯನ್ನು ರಕ್ಷಣಾ ಸಿಬ್ಬಂದಿ ಹಾಗೂ ಕೀಯನ್ನು ಹೊಂದಿರುವ ಸದಸ್ಯರ ಸಮ್ಮುಖದಲ್ಲಿ ಸೀಲ್ ಮಾಡುವುದು.
5. ಭದ್ರತಾ ಕೊಠಡಿಯನ್ನು ಒಂದೇ ದಿವಸದಲ್ಲಿ ಪದೇ ಪದೇ ತೆರೆಯುವುದನ್ನು ಹಾಗೂ ಮುಚ್ಚುವುದನ್ನು ನಿರ್ಬಂಧಿಸಬೇಕು.
6. ಗುಪ್ತ ನಿಧಿಯ ಇನ್‌ವೆಂಟರಿಯನ್ನು ಕೈಗೊಳ್ಳುವ ಸಂದರ್ಭದಲ್ಲಿ ರಕ್ಷಣಾ ಸಿಬ್ಬಂದಿಯನ್ನು ನೇಮಿಸಿರಬೇಕು ಮತ್ತು ಆಯುಕ್ತರನ್ನು ಅಥವಾ ಸಮಿತಿಯ ಸದಸ್ಯರುಗಳನ್ನು ಹೊರತುಪಡಿಸಿ ಮತ್ಯಾರು ಭದ್ರತಾ ಕೊಠಡಿಗೆ ಪ್ರವೇಶ ಪಡೆಯಲು ನಿರ್ಬಂಧಿಸಬೇಕು. ಭದ್ರತಾ ಕೊಠಡಿಗೆ ಇನ್‌ವೆಂಟರಿದಾರರು ಹಾಗೂ ಇತರರು ಪ್ರವೇಶ ಮಾಡುವ ಮುನ್ನ ಹಾಗೂ ಅಲ್ಲಿಂದ ಹೊರಬರುವಾಗ ಅವರನ್ನು ಸೂಕ್ತ ತಪಾಸಣೆಗೆ ಒಳಪಡಿಸಬೇಕು.
7. ಗುಪ್ತ ನಿಧಿಯ ಇನ್‌ವೆಂಟರಿಯನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ನೇಮಕಾತಿಗೊಳ್ಳುವ ಅಧಿಕಾರಿಯವರು ಅಥವಾ ಇಲಾಖಾ ಅಧಿಕಾರಿಯವರು ಅದನ್ನು ಕ್ರಮಬದ್ಧವಾಗಿ ಒಂದು ಕಡೆಯಿಂದ ಆರಂಭಿಸಿ ಅದನ್ನು ಪೂರ್ಣಗೊಳಿಸಬೇಕು. ಮತ್ತು ಯಾವುದೇ ಗುಪ್ತ ನಿಧಿಯನ್ನು ಸಾಧ್ಯವಾದಷ್ಟು ಸ್ಥಾನಪಲ್ಲಟ ಮಾಡದಿರಲು ಕ್ರಮವಹಿಸಬೇಕು.
8. ಗುಪ್ತ ನಿಧಿಯ ಇನ್‌ವೆಂಟರಿಯಲ್ಲಿ ಯಾವ ಯಾವ ಪ್ರಮುಖ ಅಂಶಗಳು ಇರಬೇಕು ಎಂಬುದನ್ನು ಅಧಿಕಾರಿ ಸಮಿತಿಯು ನಿರ್ಧರಿಸಬೇಕು.
9. ಭದ್ರತಾ ಕೊಠಡಿಯನ್ನು ತೆರೆಯುವ ಮೊದಲು ಸಿ.ಸಿ.ಟಿ.ವಿ ಯನ್ನು ಚಾಲೂ ಮಾಡಬೇಕು. ಮತ್ತು ಆ ದಿವಸದ ಇನ್‌ವೆಂಟರಿ ಕೆಲಸವು ಮುಗಿದು ಭದ್ರತಾ ಕೊಠಡಿಯನ್ನು ಮುಚ್ಚುವವರೆಗೆ ಇದು ಚಾಲೂನಲ್ಲಿರಬೇಕು. ಅಥವಾ ದಿನದ 24 ಗಂಟೆಯು ಚಾಲುವಿನಲ್ಲಿರಬೇಕು.
10. ಆಯಾ ದಿವಸಗಳ ಇನ್‌ವೆಂಟರಿ ವಿವರಗಳನ್ನು ಅದೇ ದಿವಸಗಳಲ್ಲಿ ಗಣಕೀಕರಣಕ್ಕೆ ಅಳವಡಿಸಬೇಕು
11. ಇನ್‌ವೆಂಟರಿ ಕೈಗೊಳ್ಳುವವರು ಇನ್‌ವೆಂಟರಿ ವಿವರಗಳನ್ನು ಬಹಿರಂಗವಾಗಿ ಚರ್ಚಿಸಬಾರದು. ಗಣಕೀಕರಣ ವಿವರಗಳು ರಹಸ್ಯವಾಗಿರಬೇಕು.
12. ಗುಪ್ತ ನಿಧಿಯ ಇನ್‌ವೆಂಟರಿಯನ್ನು ಕೈಗೊಳ್ಳುವ ಸಮಯದಲ್ಲಿ ಧೂಮಪಾನ ಮಾಡಬಾರದು, ಮತ್ತು ರಾಸಾಯನಿಕವನ್ನಾಗಲಿ ಅಥವಾ ಸ್ಫೋಟಕಗಳನ್ನಾಗಲಿ ಬಳಸಲು ನಿಷೇದವಿರಬೇಕು.
13. ಭದ್ರತಾ ಕೊಠಡಿಯ ಒಳಗೆ ಉಸಿರಾಟಕ್ಕೆ ಅನುಕೂಲವಾಗಲು ಸರಾಗವಾಗಿ ಗಾಳಿ ಚಲನೆಯಿರಲು ಫ್ಯಾನ್ ಮತ್ತು ಹವಾ ನಿಯಂತ್ರಣ ವ್ಯವಸ್ಥೆಯಿರಬೇಕು.
14. ಅಧಿಕಾರಿ ಸಮಿತಿ ಸಭೆಯಲ್ಲಿ ಅನುಮೋದನೆ ಪಡೆದ ನಂತರ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರು ಗುಪ್ತ ನಿಧಿಯ ಇನ್‌ವೆಂಟರಿಯ ಪ್ರಕ್ರಿಯೆಗೆ ಜವಾಬ್ದಾರರಾಗಿರುತ್ತಾರೆ. ಹಾಗೂ ಪ್ರತಿ ದಿವಸದಲ್ಲೂ ಈ ಪ್ರಕ್ರಿಯೆಯು ಸರಾಗವಾಗಿ ನಿರ್ವಹಣೆಯಾಗಲು ಭದ್ರತೆಯು ಸೇರಿದಂತೆ ಇತರೆ ಅವಶ್ಯಕ ಕ್ರಮಗಳನ್ನು ಕೈಗೊಳ್ಳಲು ಉದ್ಯುಕ್ತರಾಗತಕ್ಕದ್ದು.
15. ಸರ್ಕಾರಿ ರಜೆ ಮತ್ತು ಸಾರ್ವತ್ರಿಕ ರಜಾ ದಿವಸಗಳಲ್ಲಿ ಭದ್ರತಾ ಕೊಠಡಿಯ್ನು ತೆರೆಯಬಾರದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆ, (ಆಡಳಿತ ಶಾಖೆ)

PR - 2166

## FOREST, ECOLOGY AND ENVIRONMENT SECRETARIAT

**Sub: -** Regularization of contract employees of Karnataka State Pollution Control Board –Reg.

**Ref: -**

1. Proposal of Karnataka State Pollution Control Board bearing No. ಮಾನಿಮ/ಆಡಳಿತ/ ಗು.ನೌ.ಸ/2010-11/859 dated 28.12.2010.
2. Government letter No.FEE 20 EPC 2010 dated 09.03.2011 addressed to the Member Secretary, Karnataka State Pollution Control Board.
3. Orders of the Hon'ble High Court of Karnataka dated 27.02.2012 made in W.P.No. 46647/2011 (S-REG).
4. Government letter No. FEE 56 EPC 2012 dated 02.04.2012, 05.05.2012 and D.O. letter dated 14.05.2012 addressed to the Member Secretary, Karnataka State Pollution Control Board.
5. Letter No. ಮಾನಿಮ 01 ಆಡಬಿ 10/100 dated 29.05.2012 and 31.05.2012 of the Karnataka State Pollution Control Board.
6. Government letter No.56 EPC 2012 dated 07.06.2012 addressed to petitioner in W.P.No. 46647/2011 (S-REG).
7. Requisition dated 18.06.2012 submitted by the Karnataka State Pollution Control Board Contract Employees Association (R) to the Secretary to Government, Department of Forest, Ecology and Environment.

**PREAMBLE**

The proposal of Karnataka State Pollution Control Board read at (1) above was submitted to Government for regularization of their contract employees. The proposal has been examined at Government level in the light of the following opinion/guidelines of the Department of Personal and Administrative Reforms (DPAR).

(i) The States have made Acts, Rules and Regulations for implementing the constitutional guarantees and any recruitment to the service in the State or in the Union is governed by such Acts, Rules and Regulations. The Constitution does not envisage any employment outside this constitutional scheme and without following the requirements set down therein.

(ii) When a person enters a temporary employment or gets engagement as a contractual or casual workers and the engagement is not based on a proper selection as recognized by the relevant rules or procedure, he is aware of the consequences of the appointment being temporary, casual or contractual in nature. Such a person cannot invoke the theory of legitimate expectation for being confirmed in the post.

(iii) There should be no further by-passing of the constitutional requirement and regularizing or making permanent, those not duly appointed as per the constitutional scheme.

(iv) The issue has to be dealt in accordance with Circular No. ಸಿ.ಆ.ಸು.ಇ 25 ಕೆಸಅ 2003 ದಿನಾಂಕ:25.05.2006. 06.07.2006 and circular No. ಸಿ.ಆ.ಸು.ಇ 25 ಕೆಸಅ 2003 (Part) dated 13.11.2006. The circular instructions applies to the contract employees who have been taken after 01.07.1984. The Orders of the Hon'ble Supreme Court dated 10.04.2006 wherein detailed guidelines are set, applies to the State Government. The Hon'ble Court has clarified that 'merely because a temporary employee or casual wage worker is continued for a time beyond a term of his appointment he would not be entitled to be absorbed in regular service or made permanent, merely on the strength of the such continuance, if the original appointment was not made by following due process of selection as envisaged by the relevant rules.

After careful consideration of the proposal, it was observed that no such selection process was followed by the Board while engaging contract workers in the KSPCB and they were engaged on adhoc basis and are being continued from time to time.

The Government further opined that the issue of regularization of the temporary employees has already been viewed on humanitarian grounds at the Govt. level. Necessary amendments have already been issued to the Cadre and Recruitment rules of Karnataka State Pollution Control Board providing for addition of weightage of four percent of marks for each satisfactory completed year of service rendered, with a view to enable the candidate to get selected/absorbed in the direct recruitment process being followed by the Board.

The Government was also of the view that, the Hon'ble Supreme Court has categorically stated that no further by-passing of the constitutional requirement and regularizing or making permanent, those not duly appointed as per the constitutional scheme.

It was therefore decided that, the process of regularization of contract employees in the Karnataka State Pollution Control Board who have been appointed without following due process of Cadre and Recruitment Rules will not fulfill the testimony of Law.

As the recruitment or the regularization need to be in accordance with the eligibility criteria prescribed for each category of posts and as per the roaster rules of the State Govt. giving due weightage to different categories that is for SC/ ST /rural/ women and physically challenged. The recruitment also needs to be made following the general recruitment rules duly notifying the vacancies for recruitment and the candidate must possess the requisite qualifications and considering the provision of 4% marks as weightage for the service rendered in the contractual employment and age relaxation provided vide Order No. FEE 2 EPC 2008 dated 12.11.2009, the proposal of framing special rules for absorption of remaining contract employees was turn down vide Government letter read at (2) above as it does not survive testimony of Law.

Having aggrieved by this decision of Government, the Karnataka State Pollution Control Board Contract Employees Association (Regd) represented by its Secretary and President filed W.P.No. 46647/2011 in the Hon'ble High Court of Karnataka praying for quashing the above communication issued by Government vide letter read at (2) above and to issue Writ of Mandamus directing the First Respondent, the Karnataka State Pollution Control Board to consider the representation of the petitioners to regularize their services.

The Hon'ble High Court while allowing the Writ Petition vide Order dated 27.02.2012 have quashed the Government letter dated 09.03.2011 read at (2) above and have remanded the matter to the Second Respondent, that is the Secretary to Government, Ecology and Environment Department for re-consideration after providing an opportunity of hearing to the petitioner and in the light of the judgement of the Apex Court in M.L.Kesari's case.

Pursuant to the above orders of the Hon'ble High Court, the Karnataka State Pollution Control Board was asked vide letters read at (4) above to submit details of contract employees for re-consideration. The Karnataka State Pollution Control Board have submitted the details of contractual employees working presently with them vide letters read at (5) above. The Board also have requested for framing special rules for the regularization of 107 employees working presently in different cadres.

The petitioners in Writ Petition No. 46647/2011 (S-REG) were invited to provide an opportunity of being heard vide Government letter read at (6) above to be present on 18.06.2012 before the Secretary to Government, Ecology and Environment Department in his chamber and furnish all the relevant information. The petitioners appeared before the Secretary to Government, Ecology and Environment Department and submitted a written statement requesting for regularization of the services of 107 members in the Karnataka State Pollution Control Board. The main contentions raised among others are as follows:

(1) There are 107 employees in the Karnataka State Pollution Control Board working in different cadres from Class- II to Class IV for a period of 10 to 15 years without break.

(2) All the contract employees have been working satisfactorily.

(3) There were periodical assurances from the Board that their services would be regularized.

(4) The Board has even passed the resolution to take steps to regularize them and recommended it to Government.

(5) The Advisory Committee has empowered the Chairman of the Board to take decision to regularize the services of contract employees.

(6) All the contract employees fulfill the qualification and criteria fixed for regularization of their services.

(7) For all practical purposes all contract employees are treated as regular employees and work has been accordingly entrusted. The bio metric system of recording attendance is provided and the salary is paid on monthly basis through the Corporation Bank, M.G.Road Branch.

(8) Opinion of the Legal Advisory Committee dated 09.04.2008 clearly discloses that the contract employees are appointed as against sanctioned vacant posts and that these employees have required qualification.

(9) The Board is an autonomous body and no permission is taken from the Government to recruit any of these 107 contract employees. The Cadre, Recruitment and Condition of Service Regulations, 1992 provided for appointment on contract basis. There is no regulation indicating that the Board is require to take the permission of the Government to regularize the services of the contract employees. There is no requirement of special rules to be framed.

(10) Others Board and Corporations appointed by the Government of Karnataka which were similarly placed have regularized the services of their contract employees. For instance, Karnataka Renewable Energy Development Ltd. have regularized the services of contract employees as per Order dated 28.07.2006. Similarly the Karnataka Industrial Area Development Board regularized the services of contract employees vide order dated 16.01.1997, Krishna Bhagya Jala Nigam Limited regularized services of contract employees on 28.02.2004 and recently The Karnataka Part Time Job Oriented Course Employees Absorption Act, 2011 has received its assent from the Governor. The contractual employees of the KSPCB also need to be absorbed in the similar way.

(11) The four percent weightage provided for every satisfactorily completed years of service does not benefit the employees. Once such a benefit is availed it cannot be extended to second time even if the person is not selected at the first attempt.

(12) The Hon'ble High Court of Karnataka vide Order dated 27.02.2012 issued in Writ Petition No. 46647 of 2011 refer to paragraph 5 of the judgement of the Hon'ble Supreme Court in M.L.Kesari's case in which criteria is laid down for absorbing the contract employees in various Government Departments.

(13) The Hon'ble Supreme Court in the judgement of Poornachandra Pandey Vs UP State Electricity Board observed that in each and every case the ratio laid down in Umadevi's case is not applicable. Further, the Hon'ble Supreme Court as well as High Court of Karnataka has observed in various judgements regarding the guidelines that are required to be kept in mind while considering the case of contract employees for regularization of their services. One such unreported judgement is made by the Hon'ble High Court in Writ Petition No. 9916/2004 vide Order dated 26.08.2010 in which it is specified that "it is held that any person employed either temporarily or on daily wage basis and who has served continuously for a period of more than 10 years, he should normally be considered for regularization. The stress should be on the 10 years minimum service and not on any cutoff date." The Government of Karnataka in the instant case has already implemented the Court order.

(14) Order of the Hon'ble High Court of Karnataka in Writ Petition No. 46647/2011 is to be read in favourable and harmonious manner coupled with the letters dated 29.05.2012 and 31.05.2012 of the Karnataka State Pollution Control Board wherein a positive step for regularizing the services of contractual employees is requested.

The task before the Government is reconsideration of the issue of regularization of 107 contract employees of the Karnataka State Pollution Control Board pursuant to the orders of the Hon'ble High Court of Karnataka in Writ Petition No. 46647/2011 dated 27.02.2012 in the light of the judgement of the Apex Court in M.L.Kesari's case.

The Hon'ble Apex Court in SLP (C) No. 15774/2006 State of Karnataka and Others Vs M.L.Kesari's and Others dated 03.08.2010, under para 5 have clarified that there is an exception to the general principles against "regularization" enunciated in Umadevi if the following conditions are fulfilled:

(i) The employee concerned should have worked for 10 years or more in duly sanctioned post without the benefit or protection of the interim order of any court or tribunal.

(ii) The appointment of such employee should not be illegal even if irregular where the appointments are made and continued against sanctioned post or where the persons appointed do not possesses the prescribed minimum qualification, the appointments will be considered to be illegal. But, where the person employed possessed the prescribed qualification and was working against the sanctioned post but had been selected without undergoing the process of open competitive selection, such appointments are considered to be irregular.

The Hon'ble Apex Court in para 7 of the M.L.Kesari's case have stated that "the one time exercise should consider all daily wage / adhoc / those employees who had put in 10 years of continuous service as on 10.04.2006 without availing the protection of any interim orders of courts or tribunals".

While examining the instant case of regularization of daily wage employees in the light of the above analysis made by the Hon'ble Apex Court in M.L.Kesari's case taking into account the contentions of the petitioners raised in their written submission made vide letter dated 18.06.2012 and earlier occasions the following issues emerge for consideration.

(a) Whether the daily wage employees who are seeking regularization of service in Karnataka State Pollution Control Board have completed a minimum of 10 years service without availing the protection of any interim orders of court or tribunal as on the date of 10.04.2006, the date of order of Hon'ble Supreme Court in Umadevi's case and reiterated in the orders of M.L.Kesari's case.

(b) Whether the appointment made is illegal or irregular.

While going through the report submitted by the Karnataka State Pollution Control Board vide letter read at (5) above, out of 107 employees presently working on contract basis in Karnataka State Pollution Control Board only the following three employees have completed a minimum of 10 years of continuous service as on 10.04.2006 without availing the protection of any interim orders of court or tribunal:

| Sl. No. | Name of the person | Post to which appointed | Date of Appointment | Number of year of service as on 10.04.2006 |
|---|---|---|---|---|
| 1. | Sri Rudrappa Kamatar | SDA | 08.03.1996 | 10 years 1 month |
| 2. | Sri H.T.Srinivasa | SDA | 30.03.1996 | 10 years |
| 3. | Sri T. Shivanna | SDA | 01.03.1996 | 10 years 1 month |

All others having not put in a minimum of 10 years service in contractual employment in the Board as on 10.04.2006, do not qualify to get the benefit of regularization in the light of the orders of the Apex Court in Umadevi's case and as well as M.L.Kesari's case.

From the report of the Karnataka State Pollution Control Board it appears that the appointment of the above mentioned three contractual employees fitting the definition of "irregular" as defined by the Hon'ble Apex Court in M.L.Kesari's case. However, this is subject to confirmation by the Karnataka State Pollution Control Board.

Further it is also observed by the Government that right to equal opportunity and constitutional right of reservation policy provided to SC & ST and other classes cannot be taken away by way of enmass regularization of contract employees. The constitutional process of recruitment through notification and providing equal opportunities to all eligible candidate shall not be vitiated / tampered upon. The Karnataka State Pollution Control Board cadre and Recruitment rules of 1992 only provided appointment of officials on contract for a period of one year for a specific purpose. The Board would have followed the process of open recruitment, as against, appointment of officials on contract. Just because the contract employees are continued thereby have inherited the right to get regularized, does not survive as fundamental right of other eligible candidates to be appointed through a legitimate process of open recruitment and reservation policy cannot be taken away and infringed upon.

The Government have already provided 4% of weightage for each completed year of services rendered by the contract employees to get an entry through open recruitment policy following the roaster system.

The contention of the contract employees to consider 10 years of completed service as on date of the Hon'ble High Court order dated 27.02.2012 also does not survive the testimony of Law, in view of M.L.Kesari's case which specifies that a candidate become eligible only when if one has completed 10 years of service or more as on 10.04.2006 without intervention of the court order. Therefore the fundamental right of eligible candidates to be appointed through constitutional process of recruitment and reservation policy cannot be taken away on these plea forwarded by the contract employees and hence it does not survive for consideration while other issues raised by the contract employees also does not survive for consideration in view of the judgement rendered by the Hon'ble Supreme Court in M.L.Kesari case.

In view of the facts in the foregone paras only the three contractual employees mentioned above are eligible to get regularized in the Karnataka State Pollution Control Board in accordance with the statutory provisions and the orders of the Apex Court.

Hence the order.

**Government Order No. FEE 56 EPC 2012 Bangalore Dated: 17.07.2012**

The issue of regularization of contractual employees in the Karnataka State Pollution Control Board has been re examined in accordance with the provisions of law and in the light of orders of the Hon'ble Supreme Court in M.L.Kesari's case as per the directions of Hon'ble High Court of Karnataka dated 27.02.2012 in Writ Petition No. 46647 of 2011 (S-REG) after providing an opportunity of being heard to the petitioners and ordered as follows:

(i) The services of following three contract employees who have completed a minimum of 10 years of continuous service without availing the protection of any interim orders of court or tribunal as on 10.04.2006 may be regularized following due procedure of law and verifying the facts with regard to date of appointment, the post against which appointment was made, whether the person possesses minimum qualification, etc.

| Sl. No. | Name of the person | Post to which appointed | Date of Appointment | Number of year of service as on 10.04.2006 |
|---|---|---|---|---|
| 1. | Sri Rudrappa Kamatar | SDA | 08.03.1996 | 10 years 1 month |
| 2. | Sri H.T.Srinivasa | SDA | 30.03.1996 | 10 years |
| 3. | Sri T. Shivanna | SDA | 01.03.1996 | 10 years 1 month |

(ii) The proposal for regularization of the remaining contract employees of the Karnataka State Pollution Control Board who have not completed a minimum of 10 years service as on 10.04.2006 as contractual employee in the Karnataka State Pollution Control Board cannot be considered under the facts and circumstances traversed in the preamble and in the light of orders of the Apex Court in M.L.Kesari's case. However, the contract employees will continue to get the benefit of four percent weightage and age relaxation provided on humanitarian grounds as per the eligibility criteria if applied during the direct recruitment to be made by the Karnataka State Pollution Control Board subject to other terms and conditions of the order No. FEE 2 EPC 2008 dated 12.11.2009.

By order and in the name of the Governor of Karnataka,

**G.H.Anasuyamma**
Under Secretary to Government
(Ecology and Environment),
Forest, Ecology and Environment Department.

**PR - 1997**

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ವೆಂಕಟೇಶ್.ಬಿ, ತಹಶೀಲ್ದಾರ್ ಗ್ರೇಡ್–1, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಅವರಿಗೆ ತಹಶೀಲ್ದಾರ್ ಗ್ರೇಡ್–1ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 16 ಎಡಿಇ 2009, ದಿನಾಂಕ:21.01.2010

2) ಶ್ರೀ ವೆಂಕಟೇಶ್.ಬಿ, ತಹಶೀಲ್ದಾರ್ ಗ್ರೇಡ್–1, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಅವರ ಮನವಿ ದಿನಾಂಕ:12.07.2011.

3) ಬೆಂಗಳೂರು ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ.ಎಡಿಎಂ(1)/ಸಿಆರ್/22/2011–12 ದಿನಾಂಕ: 28–07–2011.

4) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 56 ಎಡಿಇ 2011, ದಿನಾಂಕ: 19–01–2012.

5) ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 35 ಎಎಸ್‌ಡಿ 2012 ದಿನಾಂಕ:17.02.2012.

6) ಶ್ರೀ ವೆಂಕಟೇಶ್.ಬಿ, ತಹಶೀಲ್ದಾರ್ ಗ್ರೇಡ್–1, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಅವರ ಮನವಿ ದಿನಾಂಕ:18.02.2012.

7) ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 296 ಎಎಸ್‌ಡಿ 2011 ದಿನಾಂಕ:22.07.2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ರ ಆದೇಶದಲ್ಲಿ, ಸದರಿಯವರ ವಿರುದ್ದದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿಕೊಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(2) ರ ಮನವಿಯನ್ನು ಸಲ್ಲಿಸಿ, ದೂರುದಾರರು ದೂರು ಕೊಡುವುದಕ್ಕೆ ಮುಂಚೆಯೇ ಭೂಮಾಪಕರು ಅಳತೆಗೆ ಹೋಗಿದ್ದು, ಎದುರುದಾರರು ತಕರಾರು ನೀಡಿ, ಗಲಾಟೆಯಾಗಿದ್ದರಿಂದ ಮತ್ತು ಅದೇ ಜಮೀನಿನ ಮೇಲೆ ಸಿವಿಲ್ ನ್ಯಾಯಾಲಯದ ಮಧ್ಯಂತರ ಆದೇಶವಿದ್ದುದರಿಂದ ಕೇವಲ ಕಾನೂನಿನ ತೊಡಕಿನಿಂದ ಅಳತೆ ತಡವಾಗಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(3) ರ ಜಿಲ್ಲಾಧಿಕಾರಿ, ಬೆಂಗಳೂರು ಅವರು ಸಹ ದೂರುದಾರರು ದೂರು ಕೊಡುವುದಕ್ಕೆ ಮುಂಚೆಯೇ ಭೂಮಾಪಕರು ಅಳತೆಗೆ ಹೋಗಿದ್ದು, ಎದುರುದಾರರು ತಕರಾರು ನೀಡಿ, ಗಲಾಟೆಯಾಗಿದ್ದರಿಂದ ಮತ್ತು ಅದೇ ಜಮೀನಿನ ಮೇಲೆ ಸಿವಿಲ್ ನ್ಯಾಯಾಲಯದ ಮಧ್ಯಂತರ ಆದೇಶವಿದ್ದುದರಿಂದ ಕೇವಲ ಕಾನೂನಿನ ತೊಡಕಿನಿಂದ ಅಳತೆ ತಡವಾಗಿರುವುದಾಗಿ ಸದರಿ ದೂರನ್ನು ದೂರುದಾರರು ವಾಪಸ್ಸು ಪಡೆಯಲು ಪತ್ರ ನೀಡಿರುವುದಾಗಿ ತಿಳಿಸಿ, ಯಾವುದೇ ಕರ್ತವ್ಯ ಲೋಪಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯದ ಮೇರೆಗೆ ಮಾನ್ಯ ಲೋಕಾಯುಕ್ತರಿಗೆ ವಹಿಸಿಕೊಡಲಾಗಿರುವ ಸರ್ಕಾರಿ ಆದೇಶ ಸಂಖ್ಯೆ:ಕಂಇ 16 ಎಡಿಇ 2009 ದಿನಾಂಕ 21–1–2010ಅನ್ನು ಮೇಲೆ ಓದಲಾದ ಕ್ರ.ಸಂ.(4)ರ ಆದೇಶದಲ್ಲಿ ಹಿಂಪಡೆಯಲಾಗಿದೆ.

ಮೇಲೆ ಓದಲಾದ ಕ್ರ.ಸಂ.(5) ರಲ್ಲಿ ಸರ್ಕಾರವು ಶ್ರೀ ವೆಂಕಟೇಶ್.ಬಿ, ತಹಶೀಲ್ದಾರ್ ಗ್ರೇಡ್–1, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಅವರಿಗೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ) ನಿಯಮಾವಳಿಗಳು 1978 ರ ನಿಯಮ 2(1)(ಎ) ರನ್ವಯ ದಿನಾಂಕ:18.07.2011 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–2 ಹುದ್ದೆಯಿಂದ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ವೇತನ ಶ್ರೇಣಿ ರೂ.14,050–ರೂ.25,050 ರಲ್ಲಿ ಪೂರ್ವಾನ್ವಯವಾಗಿ ಪದೋನ್ನತಿ ನೀಡಲಾಗಿದೆ.

ಮೇಲೆ ಓದಲಾದ ಕ್ರ.ಸಂ.(6) ರಲ್ಲಿ ಶ್ರೀ ವೆಂಕಟೇಶ್.ಬಿ, ತಹಶೀಲ್ದಾರ್ ಗ್ರೇಡ್–1, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ) ನಿಯಮಾವಳಿಗಳು 1978 ರ ನಿಯಮ 2(1)(ಎ) ರನ್ವಯ ದಿನಾಂಕ:18.07.2011 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಆಡಳಿತ ಸೇವಾ ಸಮೂಹ–ಎ (ಕಿರಿಯ ಶ್ರೇಣಿ) ವೃಂದಕ್ಕೆ ಸ್ಥಾನಪನ್ನರಾಗಲು ಬಡ್ತಿ ನೀಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(7) ರಲ್ಲಿ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದ್ದು, ತಹಶೀಲ್ದಾರ್ ಗ್ರೇಡ್–1 ವೃಂದದ ಜೇಷ್ಠತಾ ಪಟ್ಟಿಯಲ್ಲಿ ಶ್ರೀಯುತರ ಹೆಸರನ್ನು ಸೇರಿಸಿ ತಿದ್ದುಪಡಿ ಮಾಡಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 160 ಎಎಸ್‌ಡಿ 2012 ಬೆಂಗಳೂರು, ದಿನಾಂಕ:13–06–2012.**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಆರ್‌ಡಿ 296 ಎಎಸ್‌ಡಿ 2011, ದಿನಾಂಕ:27.07.2011 ರಂದು ಪ್ರಕಟಿಸಲಾಗಿರುವ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ತಹಶೀಲ್ದಾರ್ ಗ್ರೇಡ್–1 ವೃಂದದ ಕ್ರ.ಸಂ.642ರಲ್ಲಿ ಶ್ರೀ ಕೃಷ್ಣಮೂರ್ತಿ ಟಿ.ಎನ್. ಅವರ ನಂತರ ಕ್ರ.ಸಂ.642(ಎ) ನಲ್ಲಿ ಶ್ರೀ ಆರ್ ವೆಂಕಟೇಶ್.ಬಿ, ಅವರ ಹೆಸರನ್ನು ಸೇರ್ಪಡೆ ಮಾಡಿ ಈ ಕೆಳಗಿನಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ತಹಶೀಲ್ದಾರ್ ಗ್ರೇಡ್–1 ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | SC/ ST | ಜನ್ಮ ದಿನಾಂಕ | ಅಧಿಕಾರಿ ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 642 (ಎ) | ಶ್ರೀ ವೆಂಕಟೇಶ್.ಬಿ, | sc | 05–04–1964 | 01–02–2006 | 18–07–2011 | ತಹಶೀಲ್ದಾರ್ ಗ್ರೇಡ್–1 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**PR - 1869**

## ಸಹಕಾರ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಣ ಬಿಡುಗಡೆ ಮಾಡುವ ಕುರಿತು.

**ಉಲ್ಲೇಖ:**
1) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 04 TFP 2012, ಬೆಂಗಳೂರು ದಿ:27.04.2012.
2) ಸರ್ಕಾರದ ಆದೇಶ ಸಂಖ್ಯೆ:ಸಿಒ 216ಸಿಎಲ್‌ಎಸ್ 2012 ದಿ:20.06.2012
3) ಸಹಕಾರ ಸಂಘಗಳ ಅಪರ ನಿಬಂಧಕರು(ಬಳಕೆ ಮತ್ತು ಮಾರಾಟ) ಇವರ ಪತ್ರ ಸಂಖ್ಯೆ ಆರ್‌ಸಿಎಸ್/ ಯಶಸ್ವಿನಿ/ 08/2012–13 ದಿ:6.07.2012

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ(2)ರ ಆದೇಶದಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ ಈಗಾಗಲೇ ರೂ. 10.00ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (3)ರ ಪ್ರಸ್ತಾವದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು(ಬಳಕೆ ಮತ್ತು ಮಾರಾಟ) ಇವರು 2011–12ನೇ ಸಾಲಿನ ಯಶಸ್ವಿನಿ ಯೋಜನೆಯಡಿಯಲ್ಲಿ 2012 ಜೂನ್ ಅಂತ್ಯಕ್ಕೆ 76,172 ಫಲಾನುಭವಿಗಳು ಸೌಲಭ್ಯ ಪಡೆದಿದ್ದು, ಇದಕ್ಕಾಗಿ ರೂ. 58.30 ಕೋಟಿ ವೆಚ್ಚವಾಗಿರುತ್ತದೆ. ಆದ್ದರಿಂದ 2012–13ನೇ ಆರ್ಥಿಕ ಸಾಲಿನ ಆಯವ್ಯಯದಲ್ಲಿ ಈಗಾಗಲೇ ಬಿಡುಗಡೆ ಮಾಡಿರುವ ಸರ್ಕಾರಿ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2012 ದಿ:20.06.2012 ರೂ. 10.00ಕೋಟಿಗಳನ್ನು ಹೊರತುಪಡಿಸಿ ಬಾಕಿ ಉಳಿದಿರುವ ಅನುದಾನದಲ್ಲಿ 2012 ಜುಲೈ ಮಾಹೆಯ ಅನುದಾನವನ್ನಾಗಿ ಎರಡನೇ ಕಂತಿನ ರೂ.9.95 ಕೋಟಿಗಳನ್ನು ಬಿಡುಗಡೆಗೊಳಿಸಬೇಕೆಂದು ತಮ್ಮ ಪತ್ರದಲ್ಲಿ ಕೋರಿರುತ್ತಾರೆ. ಅಂದರೆ 2011–12ನೇ ಸಾಲಿನಲ್ಲಿ ಯಶಸ್ವಿನಿ ಯೋಜನೆಯಡಿಯಲ್ಲಿ ನೆಟ್‌ವರ್ಕ್ ಆಸ್ಪತ್ರೆಗಳಿಗೆ ಪಾವತಿಸಲು ಬಾಕಿ ಇರುವ ಹಣ ಪಾವತಿಗೆ ಅನುಕೂಲವಾಗುವಂತೆ ಹಾಗೂ 2012–13ನೇ ಸಾಲಿನ ಜೂನ್ ಹಾಗೂ ಜುಲೈ ಮಾಹೆಯಲ್ಲಿ ಕೈಗೊಂಡ ಶಸ್ತ್ರಚಿಕಿತ್ಸೆಗಳ ಬಿಲ್ಲು ಮೊತ್ತವನ್ನು ಪಾವತಿಸಲು ಅನುಕೂಲವಾಗುವಂತೆ 2012–13ನೇ ಸಾಲಿನ ರೂ. 40.00ಕೋಟಿಗಳ ಅನುದಾನದಲ್ಲಿ ಸರ್ಕಾರದ ಆರ್ಥಿಕ ಇಲಾಖೆಯ ಸಂಖ್ಯೆ: FD 04 TFP 2012, ಬೆಂಗಳೂರು ದಿ:27.04.2012ರ ಆದೇಶದಂತೆ ವಾರ್ಷಿಕ ಆಯವ್ಯಯದ 25%ಭಾಗ ಎರಡನೇ ಕಂತಾಗಿ ರೂ.9.95ಕೋಟಿಗಳನ್ನು ಬಿಡುಗಡೆಗೊಳಿಸಲು ಅವಕಾಶವಿರುತ್ತದೆ.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 04 TFP 2012,ಬೆಂಗಳೂರು ದಿ:27.04.2012ರಂತೆ ವರ್ಷದ ಮೊದಲನೆ ಎರಡು ತ್ರೈಮಾಸಿಕದಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಆಯಾಯ ತ್ರೈಮಾಸಿಕದಲ್ಲಿ ವಾರ್ಷಿಕ ಆಯವ್ಯಯದ ಒಟ್ಟು ಅನುದಾನ ಪೈಕಿ 25%ರಷ್ಟನ್ನು ಬಿಡುಗಡೆ ಮಾಡುವ ಅಧಿಕಾರವಿರುವುದರಿಂದ ಪ್ರಧಾನ ಕಾರ್ಯದರ್ಶಿಯವರ ಅನುಮೋದನೆ ಪಡೆದು ಮಂಜೂರಾತಿ ಆದೇಶ ನೀಡಬಹುದಾಗಿರುತ್ತದೆ ಹಾಗೂ ಅದರಂತೆ ಪ್ರಧಾನ ಕಾರ್ಯದರ್ಶಿಗಳ ಅನುಮೋದನೆ ಪಡೆದು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 216 ಸಿಎಲ್‌ಎಸ್ 2012, ಬೆಂಗಳೂರು, ದಿನಾಂಕ: 25.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುವಾಗುವಂತೆ **ರೂ.9.95 ಕೋಟಿಗಳನ್ನು (ರೂಪಾಯಿ ಒಂಬತ್ತು ಕೋಟಿ ತೊಂಬತ್ತೈದು ಲಕ್ಷಗಳು ಮಾತ್ರ)** ಎರಡನೇ ಕಂತಾಗಿ ಲೆಕ್ಕಶೀರ್ಷಿಕೆ **"2425–00–108–0–57 ಯೋಜನೆ" ಅಡಿಯಲ್ಲಿ** ಬಿಡುಗಡೆ ಮಾಡಲು ಮಂಜೂರಾತಿ ಆದೇಶ ನೀಡಲಾಗಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆಯಡಿಯ ಈ ಕೆಳಕಂಡಂತೆ ಭರಿಸತಕ್ಕದ್ದು.

(ರೂ.ಲಕ್ಷಗಳಲ್ಲಿ)

| | | | |
|---|---|---|---|
| (ಅ) | 2425–00–108–057–059 – | ಇತರೆ ಖರ್ಚು – | 725.00 |
| (ಆ) | 2425–00–108–057–422 – | ವಿಶೇಷ ಘಟಕ ಯೋಜನೆ – | 200.00 |
| (ಇ) | 2425–00–108–057–423 – | ಗಿರಿಜನ ಉಪಯೋಜನೆ – | 70.00 |
| | **ಒಟ್ಟು ರೂ.ಗಳು** | | **995.00** |

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲು ರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರಿಗೆ ಖಜಾನೆಯಿಂದ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಟ್ರಸ್ಟಿನ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್ ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ.

**PR - 2041**

## ಕಂದಾಯ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ಬ್ಯಾಲಕುಂದಿ, ಡಣಾಪುರ, ನಾಗಲಾಪುರ, ಡಣಾಯಕನಕೆರೆ ಹಾಗೂ ಗರಗ ಗ್ರಾಮಗಳಲ್ಲಿ ಮೆ: ಬಿ.ಎಂ.ಎಂ.ಇಸ್ಪಾತ್ ಕಂಪೆನಿ ನಿಯಮಿತ, ಹೊಸಪೇಟೆ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಸರ್ಕಾರಿ ಜಮೀನನ್ನು ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:**

(1) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅಧಿಸೂಚನೆ ಸಂಖ್ಯೆ: ಸಿಐ.186.ಎಸ್‌ಪಿಕ್ಯೂ.2010 ದಿನಾಂಕ: 03.04.2010

(2) ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂ/ಭೂಮಿ/74/2010–11 ದಿನಾಂಕ: 25.06.2012 ಮತ್ತು 30.06.2012

**ಪ್ರಸ್ತಾವನೆ:**

ಮೆ: ಬಿ.ಎಂ.ಎಂ. ಇಸ್ಪಾತ್ ಲಿಮಿಟೆಡ್, ಹೊಸಪೇಟೆ ಇವರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕು, ಮರಿಯಮ್ಮನಹಳ್ಳಿ ಹೋಬಳಿಯ ಬ್ಯಾಲಕುಂದಿ, ಡಣಾಪುರ, ನಾಗಲಾಪುರ, ಡಣಾಯಕನಕೆರೆ ಹಾಗೂ ಗರಗ ಗ್ರಾಮಗಳಲ್ಲಿ ಕೈಗಾರಿಕಾ ಉದ್ದೇಶಕ್ಕಾಗಿ ಪಟ್ಟಾದಾರರಿಂದ ಭೂಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಧ್ಯಭಾಗದಲ್ಲಿ/ಆಜುಬಾಜಿನಲ್ಲಿ ಬರುವ ಖಾಸಗಿ ಮತ್ತು ಸರ್ಕಾರಿ ಜಮೀನಿನಲ್ಲಿ 2 MTPA Integrated steel Plant and Slag based Cement with 300 MW Power Plant ಘಟಕ ಸ್ಥಾಪಿಸುವ ಪ್ರಸ್ತಾವನೆಗೆ ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 21.08.2008ರಂದು ನಡೆದ ರಾಜ್ಯ ಉನ್ನತ ಮಟ್ಟದ ಪರಿಶೀಲನಾ ಸಮಿತಿ (SHLCC) ಸಭೆಯಲ್ಲಿ ಅನುಮೋದನೆಯಾಗಿರುತ್ತದೆ. ಅದರಂತೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕು ಮರಿಯಮ್ಮನಹಳ್ಳಿ ಹೋಬಳಿಯ ಡಣಾಪುರ, ನಾಗಲಾಪುರ, ಡಣಾಯಕನಕೆರೆ ಹಾಗೂ ಗರಗ ಗ್ರಾಮಗಳಲ್ಲಿ ಸದರಿ ಕಂಪನಿಯ ಘಟಕಕ್ಕೆ 3530.79 ಎಕರೆ ಜಮೀನನ್ನು ಕೆ.ಐ.ಡಿ.ಬಿ.ಯವರು ಸ್ವಾಧೀನಪಡಿಸಿಕೊಂಡು ಹಂಚಿಕೆ ಮಾಡುವ ಕುರಿತು ಅನುಮತಿಸಲು ಸಮಿತಿಯು ನಿರ್ಣಯಿಸಿದೆ.

ಪ್ರಸ್ತಾವನೆಯನ್ನು ಅನುಮೋದಿಸಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಸಂಖ್ಯೆ: ಸಿಐ:312:ಎಸ್‌ಪಿಐ:2008 ದಿನಾಂಕ: 21.10.2008ರಲ್ಲಿ ಸರ್ಕಾರಿ ಆದೇಶ ಹೊರಡಿಸಲಾಗಿದೆ. ಅದರಂತೆ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕೆ.ಐ.ಎ.ಡಿ.ಬಿ ಕಾಯ್ದೆ 1966ರ ಕಲಂ 3(1)ರನ್ವಯ 1898.51 ಎಕರೆ ಸಾರ್ವಜನಿಕರಿಗೆ ಸೇರಿದ ಭೂ ಪ್ರದೇಶ ಮತ್ತು 1591.71 ಎಕರೆ ಸರ್ಕಾರಿ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಕೈಗಾರಿಕಾ ಪ್ರದೇಶವೆಂದು ಘೋಷಿಸಿ, ದಿನಾಂಕ: 03.04.2010ರಂದು ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಿರುತ್ತದೆ. ವಿಶೇಷ ಭೂಸ್ವಾಧೀನಾಧಿಕಾರಿ, ಧಾರವಾಡ ಇವರು ದಿನಾಂಕ: 06.05.2010ರಂದು ಬಳ್ಳಾರಿ ಜಿಲ್ಲಾಧಿಕಾರಿಯವರಿಗೆ ಪತ್ರ ಬರೆದು ಒಟ್ಟು 1573.06 ಎಕರೆ ಸರ್ಕಾರಿ ಜಮೀನುಗಳನ್ನು ಕೆಐಎಡಿಬಿ ಕಾಯ್ದೆ, 1966ರ ಕಲಂ 33ರಡಿಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ವರ್ಗಾವಣೆ ಮಾಡಲು ಅಗತ್ಯ ಕ್ರಮ ತೆಗೆದುಕೊಳ್ಳಬೇಕೆಂದೂ ಇದಕ್ಕೆ ಸಂಬಂಧಪಟ್ಟ ಭೂ ಸ್ವಾಧೀನ ವೆಚ್ಚವನ್ನು ಮಂಡಳಿಯೇ ಭರಿಸುತ್ತದೆಂದು ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ದಿನಾಂಕ: 25.06.2012 ಹಾಗೂ 30.06.2012ರ ಪತ್ರಗಳಲ್ಲಿ ತಿಳಿಸಿರುವ ಪ್ರಕಾರ ಒಟ್ಟು 884.51 ಎಕರೆ ಸರ್ಕಾರಿ ಜಮೀನು ಮಾತ್ರ ಹಸ್ತಾಂತರಿಸಲು ಲಭ್ಯವಿದ್ದು ಉಳಿದ ಭೂಮಿಯ ವಿವರ ಈ ಕೆಳಗಿನಂತಿದೆ.

1) ನಾಗಲಾಪುರ ಗ್ರಾಮದ ಸ.ನಂ.107ರಲ್ಲಿ ಒಟ್ಟು 590.19 ಎಕರೆಗಳನ್ನು ಅರಣ್ಯ ಇಲಾಖೆಯು ಕರ್ನಾಟಕ ಅರಣ್ಯ ಕಾಯ್ದೆ, 1963ರ ಕಲಂ 4(1)ರಂತೆ ಕಾಯ್ದಿಟ್ಟ ಅರಣ್ಯ ಪ್ರದೇಶವೆಂದು ಘೋಷಣೆ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ಢಣಾಪುರ ಗ್ರಾಮದ 2.83 ಎಕರೆ ಪ್ರದೇಶವು ರೈಲ್ವೆ ಇಲಾಖೆಗೆ ಸೇರಿರುತ್ತದೆ.

3) ಕರ್ನಾಟಕ ಅರಣ್ಯ ಅಧಿನಿಯಮಗಳ ನಿಯಮ 41(2)ರಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶದ ವ್ಯಾಪ್ತಿಗೆ 73.64 ಎಕರೆ ಇರುತ್ತದೆ.

4) ಆಕಾರ್‌ಬಂದ್‌ನಂತೆ ಕಡಿಮೆ ಇರುವ ಭೂಮಿಯ ವಿಸ್ತೀರ್ಣ 21.89 ಎಕರೆ.

ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 94(ಎ) ಮತ್ತು 94 (ಬಿ) ಅಡಿಯಲ್ಲಿ ಫಾರಂ 50 ಮತ್ತು 53 ಅರ್ಜಿಗಳು ಬಾಕಿ ಇರುವುದಿಲ್ಲ. ಅದಲ್ಲದೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರನ್ವಯ ಕಲಂ 49(ಎ), 7ಎ, 79ಎ, 79ಬಿರ ಅಡಿಯಲ್ಲಿ ಯಾವುದೇ ಪ್ರಕರಣಗಳು ಬಾಕಿ ಇರುವುದಿಲ್ಲ. ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ತಿಳಿಸಿರುವ ಪ್ರಕಾರ ಸಂಬಂಧಪಟ್ಟ ಜಮೀನಿನಲ್ಲಿ ಆಗಿರುವ ಅತಿಕ್ರಮಣವನ್ನು ತೆರವುಗೊಳಿಸಲಾಗಿದೆ.

ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ಡಣಾಪುರ, ಡಣಾಯಕನಕೆರೆ, ನಾಗಲಾಪುರ, ಗರಗ ಹಾಗೂ ಬ್ಯಾಲಕುಂದಿ ಗ್ರಾಮಗಳಲ್ಲಿ ಮಂಜೂರಾತಿಗೆ ಪ್ರಸ್ತಾಪಿಸಿರುವ ಭೂಮಿಯು ಜನವಸತಿ ಪ್ರದೇಶದಿಂದ ಕ್ರಮವಾಗಿ 1.00 ಕಿ.ಮೀ, 2.50 ಕಿ.ಮೀ, 2.00 ಕಿ.ಮೀ, 2.00 ಕಿ.ಮೀ ಹಾಗೂ 2.00 ಕಿ.ಮೀ ದೂರದಲ್ಲಿರುತ್ತದೆ.

ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ಮೇಲೆ ಓದಲಾದ ಪತ್ರಗಳಲ್ಲಿ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಮರಿಯಮ್ಮನಹಳ್ಳಿ ಹೋಬಳಿಯ ಡಣಾಪುರ, ಡಣಾಯಕನಕೆರೆ, ನಾಗಲಾಪುರ, ಗರಗ ಮತ್ತು ಬ್ಯಾಲಕುಂದಿ ಗ್ರಾಮಗಳಲ್ಲಿ ವಿವಿಧ ಸರ್ವೆ ನಂಬರುಗಳಲ್ಲಿನ ಒಟ್ಟು ವಿಸ್ತೀರ್ಣ 884.51 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಹಸ್ತಾಂತರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿ, ಬಳ್ಳಾರಿ ಇವರು ತಿಳಿಸಿರುವ ಪ್ರಕಾರ ಸಂಬಂಧಪಟ್ಟ ಭೂಮಿಯ ವಿವರ ಈ ಕೆಳಗಿನಂತಿದೆ.

| ಕ್ರ. ಸಂ | ಗ್ರಾಮ | ಕೆಐಎಡಿಬಿ ವರ್ಗಾವಣೆಗೆ ಕೋರಿರುವ ವಿಸ್ತೀರ್ಣ | ರೈಲ್ವೆ ಇಲಾಖೆಯ ವಿಸ್ತೀರ್ಣ | ಆಕಾರಬಂದ್ ನಂತೆ ಕಡಿಮೆ ಇರುವ ವಿಸ್ತೀರ್ಣ | ಅರಣ್ಯ ಇಲಾಖೆಯಿಂದ 100 ಮೀಟರ್ ವ್ಯಾಪ್ತಿಯಲ್ಲಿ ಬರುವ ವಿಸ್ತೀರ್ಣ | ಅರಣ್ಯ ಕಾಯ್ದೆ 1963 ಕಲಂ 4 (1)ರಡಿ ಪ್ರಸ್ತಾಪಿಸಿದ ವಿಸ್ತೀರ್ಣದಲ್ಲಿ ಕಡಿಮೆಗೊಳಿಸ ಬೇಕಾದ ವಿಸ್ತೀರ್ಣ | ಭೂ ಮಂಜೂರಾತಿಗೆ ಲಭ್ಯವಿಲ್ಲದ ವಿಸ್ತೀರ್ಣ (4+5+6+7) | ಭೂ ಮಂಜೂ ರಾತಿಗೆ ಲಭ್ಯವಿರುವ ಒಟ್ಟು ವಿಸ್ತೀರ್ಣ (3–8) |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | ಡಣಾಪುರ | 155.46 | 2.83 | 0.60 | 3.58 | – | 7.01 | 148.45 |
| 2. | ಡಣಾಯಕ ನಕೆರೆ | 361.52. | – | 21.29 | – | – | 21.29 | 340.23 |
| 3. | ಗರಗ | 316.67 | – | – | 35.76 | – | 35.76 | 280.91 |
| 4. | ನಾಗಲಾಪುರ | 601.88 | – | – | 0.52 | 590.19 | 590.71 | 11.17 |
| 5. | ಬ್ಯಾಲಕುಂದಿ | 137.53 | – | – | 33.78 | – | 33.78 | 103.75 |
| | **ಒಟ್ಟು** | **1573.06** | **2.83** | **21.89** | **73.64** | **590.19** | **688.55** | **884.51** |

ಆ ಪ್ರಕಾರ ಜಿಲ್ಲಾಧಿಕಾರಿಗಳು ಕರ್ನಾಟಕ ಕೈಗಾರಿಕಾ ಪ್ರದೇಶಾಬಿವೃದ್ಧಿ ಮಂಡಳಿಗೆ ಹಸ್ತಾಂತರಿಸಲು 884.51 ಎಕರೆ ವಿಸ್ತೀರ್ಣದ ಭೂಮಿ ಮಾತ್ರ ಲಭ್ಯವಿದ್ದು ಮಾರುಕಟ್ಟೆ ಬೆಲೆ ಎಕರೆಯೊಂದಕ್ಕೆ ರೂ.1,56,200–00 (ಒಂದು ಲಕ್ಷದ ಐವತ್ತಾರು ಸಾವಿರದ ಎರಡು ನೂರು ರೂಪಾಯಿಗಳು ಮಾತ್ರ) ಆಗಿರುತ್ತದೆಂದು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ:31:ಎಲ್‌ಜಿಇ:2010 ಬೆಂಗಳೂರು ದಿನಾಂಕ:04–12–2012**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ಬ್ಯಾಲಕುಂದಿ, ಡಣಾಪುರ, ನಾಗಲಾಪುರ, ಡಣಾಯಕನಕೆರೆ ಹಾಗೂ ಗರಗ ಗ್ರಾಮಗಳಲ್ಲಿನ ವಿವಿಧ ಸರ್ವೆ ನಂಬರುಗಳಲ್ಲಿನ ಒಟ್ಟು ವಿಸ್ತೀರ್ಣ 884.51 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969)ರ ನಿಯಮ 22ರಡಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಧಾರವಾಡ ಇವರ ಮೂಲಕ ಮೆ: ಬಿ.ಎಂ.ಎಂ. ಇಸ್ಪಾಟ್ ಲಿಮಿಟೆಡ್, ಹೊಸಪೇಟೆ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ. 1.56,200–00 (ಒಂದು ಲಕ್ಷದ ಐವತ್ತಾರು ಸಾವಿರದ ಎರಡು ನೂರು ರೂಪಾಯಿಗಳು ಮಾತ್ರ) ರಂತೆ ಹಾಗೂ ನಿಯಮಾನುಸಾರ ಇತರೆ ಶುಲ್ಕ ವಿಧಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲಾಗಿದೆ.

(1) ಮಂಜೂರಾತಿ ಜಮೀನಿನಲ್ಲಿ ಇರುವ ರಸ್ತೆಗಳಿಗೆ ಪರ್ಯಾಯ ರಸ್ತೆಯನ್ನು ಭೂಸ್ವಾಧೀನ ಜಮೀನಿನ ಒಂದು ಭಾಗದಲ್ಲಿ ಬಿಟ್ಟು ರಸ್ತೆ ರಚನೆ ಮಾಡತಕ್ಕದ್ದು.

(2) ಮಂಜೂರಾತಿ ಜಮೀನಿನಲ್ಲಿ ಹರಿಯುತ್ತಿರುವ ಹಳ್ಳಗಳ ಸ್ವಾಭಾವಿಕ ಹರಿವಿಗೆ ಯಾವುದೇ ವ್ಯತ್ಯಯ ಮಾಡತಕ್ಕದಲ್ಲ.

(3) ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರು ಜಮೀನು ಮಂಜೂರು ಮಾಡುವ ಮುನ್ನ ಜಮೀನಿನ ವಿಸ್ತೀರ್ಣ ಖಚಿತಪಡಿಸಿಕೊಳ್ಳುವುದು.

(4) ನ್ಯಾಯಾಲಯ ಪ್ರಕರಣಗಳು ಬಾಕಿ ಇರುವ ಜಮೀನುಗಳನ್ನು ಹಂಚಿಕೆಗೆ ಪರಿಗಣಿಸತಕ್ಕದ್ದಲ್ಲ.

(5) ಮಂಜೂರಿಗೆ ಪರಿಗಣಿಸುವ ಜಮೀನಿಗೆ ಹೊಂದಿಕೊಂಡಂತೆ ಅರಣ್ಯ ಪ್ರದೇಶವಿದ್ದಲ್ಲಿ, ಅರಣ್ಯ ಇಲಾಖೆಗೆ ಸೇರಿದ ಜಮೀನು ಮತ್ತು ಕಂದಾಯ ಇಲಾಖೆಯ ಜಮೀನನ್ನು ನಿಖರವಾಗಿ ಗುರುತಿಸಿ ಗಡಿ ನಿರ್ಧರಿಸುವುದು.

(6) ಜಮೀನುಗಳ ಮಾರುಕಟ್ಟೆ ದರವನ್ನು ನಿಗಧಿಪಡಿಸಲು ಜಿಲ್ಲಾಧಿಕಾರಿಗಳು ಸಕ್ಷಮ ಪ್ರಾಧಿಕಾರಿಯಾಗಿದ್ದು, ಅವರು ನಿಗಧಿಪಡಿಸಿದ ಮಾರುಕಟ್ಟೆ ಬೆಲೆ ಎಕರೆಯೊಂದಕ್ಕೆ ರೂ. 1.56,200/– (ಒಂದು ಲಕ್ಷದ ಐವತ್ತಾರು ಸಾವಿರದ ಎರಡು ನೂರು ರೂಪಾಯಿಗಳು ಮಾತ್ರ) ದರವನ್ನು ಪರಿಗಣಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 515 ವೆಚ್ಚ–7/2012 ದಿನಾಂಕ:25.07.2012 ರ ಸಹಮತಿ ಹಾಗೂ ಸಚಿವಸಂಪುಟದ ತೀರ್ಮಾನದಂತೆ ಬೆಲೆನಿಗಧಿಪಡಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**PR -2238**

## ಶಿಕ್ಷಣ ಸಚಿವಾಲಯ

**ವಿಷಯ:** ಖಾಸಗಿ ಅನುದಾನಿತ ಬಿ.ಇಡಿ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:** ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ ಶಿತ3 ನೇಮಕಾತಿ/ಖಾಲಿ ಹುದ್ದೆ/01/2006–07, ದಿನಾಂಕ 16–07–2011.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು, ರಾಜ್ಯದಲ್ಲಿನ ವಿವಿಧ ಸರ್ಕಾರಿ ಅನುದಾನಿತ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ರಾಜೀನಾಮೆ, ನಿವೃತ್ತಿ ಮತ್ತು ಮರಣದ ಕಾರಣದಿಂದ ಖಾಲಿ ಇರುವ ಬೋಧಕರ ಹುದ್ದೆಗಳ ಬಗ್ಗೆ ವಿವರವಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಆ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ಕೋರಿದ್ದರು. ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 146 ಯುಎನ್‌ಇ 2011, ಬೆಂಗಳೂರು, ದಿನಾಂಕ 02–07–2012**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಈ ಕೆಳಕಂಡ ವಿವಿಧ ಸರ್ಕಾರಿ ಅನುದಾನಿತ ಕಾಲೇಜುಗಳಲ್ಲಿ ಮರಣ, ರಾಜೀನಾಮೆ ಮತ್ತು ನಿವೃತ್ತಿಯ ಕಾರಣದಿಂದ ಖಾಲಿ ಇರುವ ಬೋಧಕ ಹುದ್ದೆಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಭರ್ತಿ ಮಾಡಿಕೊಳ್ಳಲು ಸರ್ಕಾರವು ಆದೇಶಿಸಿದೆ.

| ಕ್ರ.ಸಂ. | ಕಾಲೇಜಿನ ಹೆಸರು ಮತ್ತು ಸ್ಥಳ | ಹುದ್ದೆಗಳ ಸಂಖ್ಯೆ | ಹುದ್ದೆಗಳು ಯಾವ ದಿನಾಂಕದಿಂದ ಖಾಲಿ ಇರುವ ಬಗ್ಗೆ | ಹುದ್ದೆಗಳು ಖಾಲಿ ಇರಲು ಕಾರಣ | ಹುದ್ದೆಗಳ ಮೀಸಲಾತಿ |
|---|---|---|---|---|---|
| 1 | 2 | 3 | 4 | 5 | 6 |
| 1 | ಆರ್.ವಿ. ಬಿ.ಇಡಿ ಕಾಲೇಜು, ಜಯನಗರ, ಬೆಂಗಳೂರು | 03 | 30–06–1998–01<br>30–11–2001–01<br>02–05–2006–01 | ನಿವೃತ್ತಿ<br>ನಿವೃತ್ತಿ<br>ರಾಜೀನಾಮೆ | ಪ.ಜಾ<br>ಜಿ.ಎಂ.<br>ಸಾಮಾನ್ಯ |

| ಕ್ರ.ಸಂ. | ಕಾಲೇಜಿನ ಹೆಸರು ಮತ್ತು ಸ್ಥಳ | ಹುದ್ದೆಗಳ ಸಂಖ್ಯೆ | ಹುದ್ದೆಗಳು ಯಾವ ದಿನಾಂಕದಿಂದ ಖಾಲಿ ಇರುವ ಬಗ್ಗೆ | ಹುದ್ದೆಗಳು ಖಾಲಿ ಇರಲು ಕಾರಣ | ಹುದ್ದೆಗಳ ಮೀಸಲಾತಿ |
|---|---|---|---|---|---|
| 1 | 2 | 3 | 4 | 5 | 6 |
| 2 | ವಿಜಯ ಬಿ.ಇಡಿ ಕಾಲೇಜು, ಜಯನಗರ, ಬೆಂಗಳೂರು | 05 | 14–05–1999–01<br>31–01–2001–01<br>28–02–2002–01<br>31–10–2003–01<br>30–11–2005–01 | ನಿವೃತ್ತಿ<br>ನಿವೃತ್ತಿ<br>ನಿವೃತ್ತಿ<br>ನಿವೃತ್ತಿ<br>ನಿವೃತ್ತಿ | ಸಾಮಾನ್ಯ<br>ಪ.ಪಂ<br>ಸಾಮಾನ್ಯ<br>ಪ್ರವರ್ಗ–1<br>ಸಾಮಾನ್ಯ |
| 3 | ಬಿ.ಇ.ಎಸ್. ಬಿ.ಇಡಿ ಕಾಲೇಜು, ಜಯನಗರ, ಬೆಂಗಳೂರು | 02 | 01–03–1992–01<br>01–04–2005–01 | ನಿವೃತ್ತಿ<br>ನಿವೃತ್ತಿ | ಪ.ಪಂ<br>ಪ್ರವರ್ಗ–1 |
| 4 | ಎಂ.ಇ.ಎಸ್. ಬಿ.ಎಡ್ ಕಾಲೇಜು, ರಾಜಾಜಿನಗರ, ಬೆಂಗಳೂರು | 4 | 06–03–1984–01<br>31–12–1995–01<br>28–02–1996–01<br>30–06–2001–01 | ಮರಣ<br>ನಿವೃತ್ತಿ<br>ನಿವೃತ್ತಿ<br>ನಿವೃತ್ತಿ | ಪ.ಪಂ.<br>ಸಾಮಾನ್ಯ<br>ಪ.ಪಂ.<br>ಸಾಮಾನ್ಯ |
| 5 | ಡಾ: ಅಂಬೇಡ್ಕರ್ ಬಿ.ಎಡ್. ಕಾಲೇಜು, ಬೆಂಗಳೂರು | 02 | 15–02–2006–01<br>20–07–1994–01 | ನಿವೃತ್ತಿ<br>ರಾಜಿನಾಮೆ | ಪ.ಜಾ<br>ಪ.ಪಂ |
| 6 | ಸೈಂಟ್ಆನ್ಸ್ ಬಿ.ಎಡ್. ಕಾಲೇಜು, ಮಂಗಳೂರು | 04 | 01–11–1997–01<br>17–09–2000–01<br>01–08–2001–01<br>01–06–2004–01 | ನಿವೃತ್ತಿ<br>ಮರಣ<br>ನಿವೃತ್ತಿ<br>ನಿವೃತ್ತಿ | ಅಲ್ಪ ಸಂಖ್ಯಾತರ ಸಂಸ್ಥೆ |
| 7 | ಕಮಲಬಾಳಿಗ ಬಿ.ಎಡ್ ಕಾಲೇಜು, ಕುಮಟಾ | 01 | 31–10–1996–01 | ನಿವೃತ್ತಿ | ಪ.ಪಂ. |
| 8 | ಶಂಕರಗೌಡ ಬಿ.ಎಡ್., ಕಾಲೇಜು, ಮಂಡ್ಯ | 02 | 31–01–2003–01<br>31–03–2011–01 | ನಿವೃತ್ತಿ<br>ನಿವೃತ್ತಿ | ಪ.ಪಂ.<br>ಸಾಮಾನ್ಯ |
| 9 | ನ್ಯಾಷನಲ್ ಬಿ.ಎಡ್ ಕಾಲೇಜು, ಶಿವಮೊಗ್ಗ | 06 | 01–04–1996–01<br>01–09–1998–01<br>01–03–2005–01<br>01–05–2005–01<br>01–06–2006–01<br>30–11–2010–01 | ನಿವೃತ್ತಿ | ಪ.ಜಾ<br>ಸಾಮಾನ್ಯ<br>ಪ.ಪಂ<br>ಸಾ(ಮಹಿಳೆ)<br>ಪ್ರವರ್ಗ–1<br>ಸಾಮಾನ್ಯ |
| 10 | ವಿವೇಕಾನಂದ ಬಿ.ಎಡ್ ಕಾಲೇಜು, ಅರಸೀಕೆರೆ | 03 | 31–03–2008–01<br>31–03–2004–01<br>30–11–2010–01 | ನಿವೃತ್ತಿ<br>ನಿವೃತ್ತಿ<br>ನಿವೃತ್ತಿ | ಸಾಮಾನ್ಯ<br>ಪ.ಜಾ<br>ಸಾಮಾನ್ಯ |
| 11 | ಓಂ ಕಾರ್ಮೆಲ್, ಸೋಮಾನಿ ಬಿ.ಎಡ್., ಕಾಲೇಜು, ಮೈಸೂರು | 04 | 31–05–1993–01<br>31–05–2000–01<br>31–12–2003–01<br>31–04–2007–01 | ನಿವೃತ್ತಿ | ಪ.ಪಂ<br>ಸಾಮಾನ್ಯ<br>ಸಾಮಾನ್ಯ<br>ಸಾಮಾನ್ಯ |

| ಕ್ರ.ಸಂ. | ಕಾಲೇಜಿನ ಹೆಸರು ಮತ್ತು ಸ್ಥಳ | ಹುದ್ದೆಗಳ ಸಂಖ್ಯೆ | ಹುದ್ದೆಗಳು ಯಾವ ದಿನಾಂಕದಿಂದ ಖಾಲಿ ಇರುವ ಬಗ್ಗೆ | ಹುದ್ದೆಗಳು ಖಾಲಿ ಇರಲು ಕಾರಣ | ಹುದ್ದೆಗಳ ಮೀಸಲಾತಿ |
|---|---|---|---|---|---|
| 1 | 2 | 3 | 4 | 5 | 6 |
| 12 | ಸೈಂಟ್ ಜೋಸೆಫ್ ಬಿ.ಎಡ್ ಕಾಲೇಜು, ಮೈಸೂರು | 04 | 01–11–1986–01<br>01–05–1996–01<br>01–08–2001–01<br>01–04–2003–01 | ನಿವೃತ್ತಿ | – |
| 13 | ಶಾರದಾ ವಿಲಾಸ್ ಬಿ.ಎಡ್ ಕಾಲೇಜು, ಮೈಸೂರು | 02 | 13–01–1999–01<br>30–04–2007–01 | ರಾಜಿನಾಮೆ<br>ನಿವೃತ್ತಿ | ಪ.ಪಂ<br>ಸಾಮಾನ್ಯ |
| 14 | ಟಿ.ಎಂ.ಇ.ಎ. ಬಿ.ಎಡ್, ಕಾಲೇಜು, ಹರಪನಹಳ್ಳಿ, ದಾವಣಗೆರೆ ಜಿಲ್ಲೆ | 01 | 01–06–1994–01 | ನಿವೃತ್ತಿ | ಪ.ಪಂ |
| 15 | ಶ್ರೀಶೈಲ ಬಿ.ಎಡ್ ಕಾಲೇಜು, ಹರಿಹರ, ದಾವಣಗೆರೆ ಜಿಲ್ಲೆ | 03 | 28–02–2006–01<br>29–04–2006–01<br>31–07–2006–01 | ನಿವೃತ್ತಿ<br>ನಿವೃತ್ತಿ<br>ನಿವೃತ್ತಿ | ಪ.ಜಾ<br>ಪ.ಪಂ<br>ಸಾಮಾನ್ಯ |

**ಷರತ್ತುಗಳು:**

1. ಪ್ರಸ್ತಾಪಿತ ಖಾಲಿ ಹುದ್ದೆಗಳು ಈ ಹಿಂದೆ ಸರ್ಕಾರದ ಆದೇಶ ಮೂಲಕ ವೇತನಾನುದಾನಕ್ಕೆ ಒಳಪಟ್ಟಿದ್ದು, ಮೇಲ್ಕಾಣಿಸಿದ ಕಾರಣಗಳಿಂದ ಅಂದರೆ, ನಿವೃತ್ತಿ ರಾಜೀನಾಮೆ ಮತ್ತು ಮರಣದ ಕಾರಣಗಳಿಂದ ಖಾಲಿಯಾಗಿರುವುದನ್ನು ಖಚಿತಪಡಿಸಿಕೊಂಡ ನಂತರವೇ ಅವುಗಳನ್ನು ತುಂಬಲು ಅನುಮತಿ ನೀಡತಕ್ಕದ್ದು.
2. ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದ ಆದೇಶ ಸಂಖ್ಯೆ: ಇಡಿ 46 ಎಸ್ಇಪಿ 2006, ದಿನಾಂಕ 12–04–2006ರ ಅಂಶಗಳನ್ನು ದಾಖಲೆಗಳ ಸಹಿತ ಪರಿಶೀಲಿಸಿ ದೃಢಪಡಿಸಿಕೊಂಡು ನಂತರ ಅನುಮೋದನೆ ನೀಡಬೇಕು.
3. ಹುದ್ದೆಗಳಿಗೆ ನೇಮಕಾತಿ ಮಾಡುವ ಮುನ್ನ ವಿದ್ಯಾರ್ಹತೆ, ವಯೋಮಿತಿ, ಮೀಸಲಾತಿ ಇತ್ಯಾದಿ ನೇಮಕಾತಿ ನಿಯಮಗಳನ್ನು/ಜಾರಿಯಲ್ಲಿರುವ ಆದೇಶಗಳನ್ನು ಪಾಲಿಸಿ ಪಾರದರ್ಶಕವಾಗಿ ನೇಮಕ ಮಾಡಿರುವುದನ್ನು ದಾಖಲೆಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ,ಹುದ್ದೆಗಳ ಪ್ರಕಟಣೆಗಾಗಿ ಅನುಮತಿಯನ್ನು ನೀಡುವುದು. ಮೇಲೆ ತಿಳಿಸಿದ ಎಲ್ಲಾ ಕ್ರಮಗಳನ್ನು ಪಾಲಿಸಿ ನೇಮಕಾತಿಯ ಆದೇಶ ಹೊರಡಿಸಿದ ನಂತರ ವೇತನಾನುದಾನ ಬಿಡುಗಡೆ ಮಾಡಬೇಕು. ಆದೇಶ ಹೊರಡಿಸಿದ ದಿನಾಂಕದಿಂದ ವೇತನಾನುದಾನ ಬಿಡುಗಡೆ ಮಾಡಬೇಕೆ ಹೊರತು ಹಿಂದಿನ ಸೇವೆ ಪರಿಗಣಿಸಲು ಅವಕಾಶ ಇರುವುದಿಲ್ಲ.
4. ನೇಮಕಾತಿಯ ಪ್ರಸ್ತಾವನೆಗಳನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ನೇಮಕಾತಿಗಾಗಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು NCTE/UGC ನಿಯಮಗಳನುಸಾರ ನಿಗದಿತ ವಿದ್ಯಾರ್ಹತೆಯನ್ನು ಹೊಂದಿರಬೇಕು. NET/SLET ಪರೀಕ್ಷೆಗಳಲ್ಲಿ ಅಭ್ಯರ್ಥಿಗಳು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು ಅಥವಾ ಪಿ.ಹೆಚ್‌ಡಿ ಪದವಿಯನ್ನು ಯುಜಿಸಿ ನಿಯಮಗಳಂತೆ ಪಡೆದಿರಬೇಕು.
6. ಕಾಲೇಜುಗಳು ನಿಗದಿತ ವಿದ್ಯಾರ್ಥಿ ಪ್ರಮಾಣವನ್ನು ಹೊಂದಿರಬೇಕು.
7. ಮೇಲ್ಕಂಡ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಯಾವ ಪ್ರವರ್ಗದ ಅಭ್ಯರ್ಥಿಗಳಿಗೆ ಮೀಸಲಿರಿಸಲಾಗಿದೆಯೋ ಅದೇ ವರ್ಗದ ಅಭ್ಯರ್ಥಿಯಿಂದ ಭರ್ತಿ ಮಾಡತಕ್ಕದ್ದು (ಮೇಲಿನ ಕೋಷ್ಟಕದಲ್ಲಿ ಕಲಂ 6ರಲ್ಲಿ ತಿಳಿಸಿರುವಂತೆ).

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 291 ವೆಚ್ಚ 8/2012, ದಿನಾಂಕ 19–06–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ್‌ರಾವ್ ಕೇಸರ್‌ಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**PR -1907**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಭರತ್‌ಕುಮಾರ್ ಬಿ.ಎನ್. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಕುಂಬಾರವಾಡ, ಜೊಯಿಡಾ ತಾಲ್ಲೂಕು, ಕಾರವಾರ ಜಿಲ್ಲೆ. ಇವರನ್ನು ಅನಧಿಕೃತ ಗೈರುಹಾಜರಿ ಆರೋಪದ ಮೇಲೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ.** ಆಯುಕ್ತರು ಆಕುಕ ಸೇವೆಗಳು, ಬೆಂಗಳೂರು ಪತ್ರ ಸಂಖ್ಯೆ: ಡಿಪಿಜಿ/ಬೆಂವಿ(1)ಕಾ/04/2011–12, ದಿನಾಂಕ: 17/4/2012 ಮತ್ತು ದಿನಾಂಕ: 19/6/2012.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ರವರು ಡಾ: ಭರತ್‌ಕುಮಾರ್ ಬಿ.ಎನ್. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಕುಂಬಾರವಾಡ, ಜೊಯಿಡಾ ತಾಲ್ಲೂಕು, ಕಾರವಾರ ಜಿಲ್ಲೆ. ಇವರು ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿದ್ದು, ತದನಂತರ ದಿನಾಂಕ: 7/7/2007ರಂದು ಸರ್ಕಾರಿ ಸೇವೆಯಲ್ಲಿ ಖಾಯಂಪೂರ್ವ ಸೇವಾವಧಿ ಮೇರೆಗೆ ವಿಲೀನಗೊಳಿಸಲಾಗಿದ್ದು, ದಿನಾಂಕ: 19/5/2008ರಿಂದ 2/6/2008ರವರೆಗೆ ರಜೆ ಮಂಜೂರಾತಿ ಕೋರಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಂದ ಅನುಮತಿ ಪಡೆದು ರಜೆಯ ಮೇಲೆ ತೆರಳಿರುತ್ತಾರೆ. ನಂತರ ಯಾವುದೇ ವಿಧದ ರಜೆಯನ್ನು ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಸರ್ಕಾರಿ ಕೆಲಸಕ್ಕೆ ಮರಳಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸದರಿ ವೈದ್ಯಾಧಿಕಾರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು 1977ರ ನಿಯಮ 6(1)(ಬಿ) ರನ್ವಯ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ.

ಸರ್ಕಾರವು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರ ಪ್ರಸ್ತಾವನೆ ಹಾಗೂ ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಿ ಡಾ: ಭರತ್‌ಕುಮಾರ್ ಬಿ.ಎನ್. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಕುಂಬಾರವಾಡ, ಜೊಯಿಡಾ ತಾಲ್ಲೂಕು, ಕಾರವಾರ ಜಿಲ್ಲೆ ಇವರು ಖಾಯಂಪೂರ್ವ ಸೇವಾ ಅವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಸದರಿ ವೈದ್ಯಾಧಿಕಾರಿಯವರನ್ನು ಕರ್ನಾಟಕ ನಾಗರೀಕ ಸೇವಾ(ಪರಿವೀಕ್ಷಣಾ) ನಿಯಮಾವಳಿಗಳ ನಿಯಮ 6(1)(ಬಿ) ರನ್ವಯ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 153 ಎಂಎಸ್‌ಎ 2012 ಬೆಂಗಳೂರು ದಿನಾಂಕ: 12/07/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ: ಭರತ್‌ಕುಮಾರ್ ಬಿ.ಎನ್. ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಕುಂಬಾರವಾಡ, ಜೊಯಿಡಾ ತಾಲ್ಲೂಕು, ಕಾರವಾರ ಜಿಲ್ಲೆ. ಇವರು ಖಾಯಂಪೂರ್ವ ಸೇವಾ ಅವಧಿಯಲ್ಲಿಯೇ ಅನಧಿಕೃತ ಗೈರುಹಾಜರಾಗಿರುವುದರಿಂದ ಸದರಿ ವೈದ್ಯಾಧಿಕಾರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು 1977ರ ನಿಯಮ 6(1)(ಬಿ) ರನ್ವಯ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಫ್. ಹುಬ್ಬಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

PR -1991

## ವಸತಿ ಸಚಿವಾಲಯ

**ವಿಷಯ:** ಯಲಹಂಕ ಉಪನಗರದಲ್ಲಿ ಕರ್ನಾಟಕ ಗೃಹ ಮಂಡಳಿಯ ಬಡಾವಣೆಯಲ್ಲಿರುವ ನಿವೇಶನ ಸಂಖ್ಯೆ.24 ರ 3.34 ಎಕರೆ ವಿಸ್ತೀರ್ಣದ ಜಾಗದಲ್ಲಿ ಕರ್ನಾಟಕ ಗೃಹ ಮಂಡಳಿಯು ಖಾಸಗಿ ಸಹಭಾಗಿತ್ವದಲ್ಲಿ ವಾಣಿಜ್ಯ ಸಂಕೀರ್ಣ ನಿರ್ಮಾಣ ಕೈಗೊಳ್ಳಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕರ್ನಾಟಕ ಗೃಹ ಮಂಡಳಿಯ ರವರ ಪತ್ರ ಸಂಖ್ಯೆ ಕಗೃಮಂ/ಮುಅ/ಯಲಹಂಕ/ವಾಣಿಜ್ಯ ಸಂಕೀರ್ಣ/ಖಾಸಗಿ ಸಹಭಾಗಿತ್ವ/ಬೆಂಗಳೂರು/2011–12/689/1883. ದಿನಾಂಕ: 11–08–2011, 03–11–2011 ಮತ್ತು 03/08–03–12.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು, ಪ್ರಸ್ತಾವನೆ ಸಲ್ಲಿಸುತ್ತಾ, ಯಲಹಂಕ ಉಪನಗರದಲ್ಲಿರುವ ಕರ್ನಾಟಕ ಗೃಹ ಮಂಡಳಿ ಬಡಾವಣೆಯ ನಿವೇಶನ ಸಂಖ್ಯೆ.24ರಲ್ಲಿನ 3.34 ಎಕರೆ ವಿಸ್ತೀರ್ಣದ ಜಾಗದಲ್ಲಿ ವಾಣಿಜ್ಯ ಸಂಕೀರ್ಣವನ್ನು ಸಾರ್ವಜನಿಕ ಮತ್ತು ಖಾಸಗಿ

ಸಹಭಾಗಿತ್ವ ಯೋಜನೆಯಡಿಯಲ್ಲಿ ನಿರ್ಮಿಸಲು ಉದ್ದೇಶಿಸಲಾಗಿದ್ದು, ಈ ರೀತಿ ಯೋಜನೆಯನ್ನು ಕರ್ನಾಟಕ ಗೃಹ ಮಂಡಳಿಯು ಮೊದಲ ಬಾರಿಗೆ ಕೈಗೊಳ್ಳುತ್ತಿದ್ದು ಯೋಜನೆಯಿಂದ ಯಾವುದೇ ರೀತಿಯ ಆರ್ಥಿಕ ನಷ್ಟವಾಗಬಾರದೆಂಬ ಕಾರಣದಿಂದ, ಯೋಜನೆಯನ್ನು ಯಶಸ್ವಿಯಾಗಿ ನಿರ್ವಹಿಸಲು ಮೆ:ಅರ್ನೆಸ್ಟ್ ಅಂಡ್ ಯಂಗ್ ಇವರನ್ನು ತಾಂತ್ರಿಕ ಸಲಹೆಗಾರರನ್ನಾಗಿ ನೇಮಿಸಲು ದಿನಾಂಕ:31–07–2010ರ 424ನೆ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ. ಸದರಿಯವರ ಸಲಹೆಯನ್ವಯ ಕ್ರಮ ಕೈಗೊಳ್ಳಲಾಗುತ್ತಿದ್ದು ಯಲಹಂಕ ಬಡಾವಣೆಯನ್ನು 20 ವರ್ಷಗಳ ಹಿಂದೆಯೇ ನಿರ್ಮಿಸಿರುವುದರಿಂದ, ಅಲ್ಲಿ ಹೆಚ್ಚಿನ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಹಾಗೂ ಗರಿಷ್ಠ ಮಟ್ಟದಲ್ಲಿ ವಾಣಿಜ್ಯ ನಿವೇಶನವನ್ನು ಸದುಪಯೋಗಪಡಿಸಿಕೊಂಡು ಮಂಡಳಿಯು ನಿರಂತರ ಆವರ್ತ ಆದಾಯವನ್ನು ಗಳಿಸುವಂತೆ ಮಾಡುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

ಆದ್ದರಿಂದ, ಯೋಜನೆಯನ್ನು ಕೈಗೊಳ್ಳಲು ಸದರಿ ಯೋಜನೆಯ ತಾಂತ್ರಿಕ ಸಲಹೆಗಾರರು ತಯಾರಿಸಿದ ಟೆಂಡರ್ ನಿಯಮಾವಳಿಗಳನ್ವಯ ಅನುಷ್ಠಾನಗೊಳಿಸಲು ಉದ್ದೇಶಿಸಿ ದಿನಾಂಕ:15–03–2011 ರಂದು ಟೆಂಡರ್ ಅಧಿಸೂಚನೆ ಪ್ರಕಟಿಸಲಾಗಿರುತ್ತದೆ. ಅದರನ್ವಯ, 10 ಗುತ್ತಿಗೆದಾರರು ಟೆಂಡರ್ ದಾಖಲೆಗಳನ್ನು ಆನ್‌ಲೈನ್ ಮುಖಾಂತರ ಸಲ್ಲಿಸಿದ್ದರು. ಆ ಪೈಕಿ, ಸದರಿ ಟೆಂಡರ್‌ಗಳನ್ನು ದಿನಾಂಕ:19–07–2011ರ ಟೆಂಡರ್ ಪರಿಶೀಲನಾ ಸಮಿತಿ ಸಭೆಯಲ್ಲಿ ಪರಿಶೀಲಿಸಿ, ಮೆ:ಎನ್.ಸಿ.ಸಿ. ಅರ್ಬನ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್, ಇವರು ನಮೂದಿಸಿರುವ ಮೊತ್ತವು ನಿಗದಿಪಡಿಸಿರುವ ಮೊತ್ತಕ್ಕೆ ಅತಿ ಕಡಿಮೆ ಮೊತ್ತದ ಅಂತರವಿರುವುದರಿಂದ, ಅವರಿಗೆ ಸದರಿ ವಾಣಿಜ್ಯ ಸಂಕೀರ್ಣವನ್ನು 30 ವರ್ಷಗಳ ವರೆಗೆ ಗುತ್ತಿಗೆ ಕರಾರಿನ ಆಧಾರದ ಮೇಲೆ ನೀಡಲು ಉದ್ದೇಶಿತ ಯೋಜನೆಗೆ ಹಾಗೂ ಟೆಂಡರ್ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಕರ್ನಾಟಕ ಗೃಹ ಮಂಡಳಿ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲು ನಿರ್ಣಯಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ 352 ಕಗೃಮಂ 2011, ಬೆಂಗಳೂರು, ದಿನಾಂಕ:19–06–2012.**

ಮೇಲಿನ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಯಲಹಂಕ ಉಪನಗರದಲ್ಲಿ, ಕರ್ನಾಟಕ ಗೃಹ ಮಂಡಳಿಯ ಬಡಾವಣೆಯಲ್ಲಿರುವ ನಿವೇಶನ ಸಂಖ್ಯೆ.24ರಲ್ಲಿನ 3.24 ಎಕರೆ ವಿಸ್ತೀರ್ಣದ ಜಾಗದಲ್ಲಿ ಬಹುಮಹಡಿ ವಾಣಿಜ್ಯ ಸಂಕೀರ್ಣವನ್ನು ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವ ಯೋಜನೆಯಡಿ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಸದರಿ ವಾಣಿಜ್ಯ ಸಂಕೀರ್ಣ ನಿರ್ಮಾಣ ಯೋಜನೆಯ ರೂಪುರೇಷೆ ಗಳನ್ನೊಳಗೊಂಡ ವಿವರವಾದ ಯೋಜನಾ ವರದಿಯನ್ನು ತಯಾರಿಸಿ, ಸರ್ಕಾರದ ಅನುಮೋದನೆ ಪಡೆಯುವಂತೆ ಕರ್ನಾಟಕ ಗೃಹ ಮಂಡಳಿಯ ಆಯುಕ್ತರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಪಾರ್ವತಿ**

ಪೀಠಾಧಿಕಾರಿ–3,

ವಸತಿ ಇಲಾಖೆ.

PR -2079